# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 440
ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಗರಾಜ್)
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 06-03-2020

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ಪಿರಿಯಾಪಟ್ಟಣದಲ್ಲಿ ನಿರ್ಮಿಸುತ್ತಿರುವ ಬಸ್ ನಿಲ್ದಾಣದ ಕಾಮಗಾರಿ ಮಂದಗತಿಯಿಂದ ನಡೆಯುತ್ತಿದ್ದು, ಇದನ್ನು ಆದಷ್ಟು ಬೇಗ ಪೂರ್ಣಗೊಳಿಸಲು ಕ್ರಮ ಜರುಗಿಸಲಾಗುವುದೇ; ಯಾವ ಯಾವ ಕಾಮಗಾರಿಗಳು ಬಾಕಿ ಇವೆ; ಯಾವಾಗ ಈ ಕಾಮಗಾರಿಗಳನ್ನು ಸಂಪೂರ್ಣಗೊಳಿಸಲಾಗುತ್ತದೆ; | ಪಿರಿಯಾಪಟ್ಟಣದಲ್ಲಿ ಬಸ್ ನಿಲ್ದಾಣ ನಿರ್ಮಿಸಲು ಒಟ್ಟು 02 ಎಕರೆ 13.50 ಗುಂಟೆ ನಿವೇಶನ ಮಂಜೂರಾಗಿರುತ್ತದೆ. ಈ ನಿವೇಶನದ ಪೈಕಿ 01 ಎಕರೆ 10 ಗುಂಟೆ ನಿವೇಶನದಲ್ಲಿ ಬಸ್ ನಿಲ್ದಾಣವನ್ನು ನಿರ್ಮಿಸಿ, ದಿನಾಂಕ: 09.02.1986 ರಲ್ಲಿ ಕಾರ್ಯಾಚರಣೆಗೊಳಿಸಲಾಗಿರುತ್ತದೆ. ಉಳಿದ 01 ಎಕರೆ 03.50 ಗುಂಟೆ ನಿವೇಶನದ ಬಗ್ಗೆ ಮೂಲ ಮಾಲೀಕರು ಘನ ನ್ಯಾಯಾಲಯದಲ್ಲಿ ದಾವೆ ಹೂಡಿದ್ದು, ಪ್ರಕರಣಗಳು ನ್ಯಾಯಾಲಯದಲ್ಲಿರುತ್ತವೆ.<br><br>2018-19ನೇ ಸಾಲಿನ ವಿಶೇಷ ಅಭಿವೃದ್ಧಿ ಯೋಜನೆಯಡಿಯಲ್ಲಿ ಮೊದಲನೇ ಹಂತದಲ್ಲಿ ಅಭಿವೃದ್ಧಿ ಕಾಮಗಾರಿಗಳಿಗೆ ರೂ.100.00 ಲಕ್ಷಗಳು ಮಂಜೂರಾಗಿದ್ದು, ಇದರಲ್ಲಿ ಮುಚ್ಚಳ ಹೊದಿಕೆಯ ಪುನರ್ ನಿರ್ಮಾಣ, ಉಪಹಾರ ಗೃಹದ ನವೀಕರಣ, ಮುಚ್ಚಳ ಹೊದಿಕೆ ನೆಲಹಾಸನ್ನು ಬದಲಾಯಿಸುವುದು, ಇರುವ ಕಟ್ಟಡದಲ್ಲೇ ವಾಣಿಜ್ಯ ಮಳಿಗೆಗಳನ್ನಾಗಿ ಮಾರ್ಪಡಿಸಿರುವುದು, ಇರುವ ಕಟ್ಟಡದಲ್ಲೇ ಮಹಿಳೆಯರ ಮತ್ತು ಪುರುಷರ ಶೌಚಾಲಯಗಳನ್ನು ನವೀಕರಿಸಿರುವುದು ಹಾಗೂ ದ್ವಿಚಕ್ರ ವಾಹನ ನಿಲ್ದಾಣ ನಿರ್ಮಿಸುವುದು, ವಿದ್ಯುಚ್ಛಕ್ತಿಗೆ ಸಂಬಂಧಿಸಿದ ಕಾಮಗಾರಿಗಳು, ಮತ್ತು ಮುಖ್ಯ ಕಟ್ಟಡದ ಮುಂಭಾಗದ ನವೀಕರಣ ಈ ಎಲ್ಲಾ ಕಾಮಗಾರಿಗಳನ್ನು ನಿರ್ವಹಿಸಲಾಗಿದ್ದು, ಮೊದಲನೇ ಹಂತದ ಕಾಮಗಾರಿಯು ಪೂರ್ಣಗೊಂಡಿರುತ್ತದೆ. |
| ಆ) | ಬಸ್ ನಿಲ್ದಾಣದಲ್ಲಿ ಪ್ರಯಾಣಿಕರಿಗೆ ಕುಳಿತುಕೊಳ್ಳಲು ಆಸನ ವ್ಯವಸ್ಥೆಯನ್ನು ಮಾಡಲಾಗುವುದೇ; ರೋಟರಿಯವರು ಹಾಕಿಸಿರುವ ಕಲ್ಲುಬೆಂಚುಗಳನ್ನು ಸೂಕ್ತವಾಗಿ ನಿರ್ವಹಣೆ ಮಾಡಿ ಪ್ರಯಾಣಿಕರಿಗೆ ಅನುಕೂಲ ಮಾಡಿಕೊಡಲಾಗುವುದೇ; | ಪಿರಿಯಾಪಟ್ಟಣ ಬಸ್ ನಿಲ್ದಾಣದಲ್ಲಿ ಈಗಾಗಲೇ ಪ್ರಯಾಣಿಕರು ಕುಳಿತುಕೊಳ್ಳಲು ನಿರೀಕ್ಷಣಾ ಹಜಾರದಲ್ಲಿ ಆಸನಗಳ ವ್ಯವಸ್ಥೆ ಮಾಡಲಾಗಿದೆ ಹಾಗೂ ಬೆಂಚುಗಳನ್ನು ನಿಗಮದ ವತಿಯಿಂದಲೇ ಅಳವಡಿಸಲಾಗಿದೆ. |
| ಇ) | ರೋಟರಿಯವರು ನೀಡಿದ್ದ ಶುದ್ಧ ಕುಡಿಯುವ ನೀರಿನ ಘಟಕ ಕೆಟ್ಟುಹೋಗಿದ್ದು, ಅದನ್ನು ಸರಿಪಡಿಸಿ ಪ್ರಯಾಣಿಕರಿಗೆ ಕುಡಿಯುವ ನೀರಿನ ಸೌಲಭ್ಯ ಕಲ್ಪಿಸಲಾಗುವುದೇ? | ರೋಟರಿ ಕ್ಲಬ್‌ನವರು ನಿರ್ಮಿಸಿರುವ ಕುಡಿಯುವ ನೀರಿನ ಘಟಕವನ್ನು ಸರಿಪಡಿಸಲಾಗಿದೆ. |

ಸಂಖ್ಯೆ: ಟಿಡಿ 40 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು